# ಕರ್ನಾಟಕ ವಿಧಾನ ಪರಿಷತ್ತು

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1352
2) ಸದಸ್ಯರ ಹೆಸರು : ಶ್ರೀ ಐವನ್ ಡಿ'ಸೋಜಾ (ನಾಮನಿರ್ದೇಶನ ಹೊಂದಿದವರು)
3) ಉತ್ತರಿಸುವ ದಿನಾಂಕ : 18-03-2020
4) ಉತ್ತರಿಸಬೇಕಾದ ಸಚಿವರು : ಮುಜರಾಯಿ, ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ಮೀನುಗಾರಿಕಾ ಅಭಿವೃದ್ಧಿ ನಿಗಮವು 2019-20 ರಲ್ಲಿ ಗಳಿಸಿದ ಲಾಭವೆಷ್ಟು; (ವಿವರ ನೀಡುವುದು) | ನಿಗಮವು 2019-20ನೇ ಸಾಲಿನ ದಿನಾಂಕ: 30-09-2019ರ ಅಂತ್ಯಕ್ಕೆ ರೂ.74.77 ಲಕ್ಷ ನಿವ್ವಳ ಲಾಭಗಳಿಸಿದ್ದು, ಒಟ್ಟಾರೆ ಸಂಚಿತ ಲಾಭಾಂಶವು ರೂ.11.48 ಕೋಟಿಯಾಗಿರುತ್ತದೆ. |
| ಆ) | ಕೆ.ಎಫ್.ಡಿ.ಸಿ. ಯಿಂದ ನಡೆಸಲ್ಪಡುವ ಮೀನು ಊಟದ ಹೋಟೆಲ್ ಬೆಂಗಳೂರು ಶಾಖೆಯು ಲಾಭದಲ್ಲಿದೆಯೇ; ದಿನವೊಂದಕ್ಕೆ ನಡೆಸುವ ವ್ಯವಹಾರ ಎಷ್ಟು; ಇಂತಹ ಹೋಟೆಲ್ ಗಳನ್ನು ರಾಜ್ಯದ ಎಷ್ಟು ಕಡೆಗಳಲ್ಲಿ ಪ್ರಾರಂಭಿಸಲು ಸರಕಾರದ ಮುಂದೆ ಯೋಜನೆಗಳಿವೆ; (ವಿವರ ನೀಡುವುದು) | ಬೆಂಗಳೂರಿನ ಕಬ್ಬನ್‌ಪಾರ್ಕಿನಲ್ಲಿ ನಿಗಮದ ಮತ್ಸ್ಯದರ್ಶಿನಿ ಮಳಿಗೆಯು ಲಾಭದಲ್ಲಿರುತ್ತದೆ. 2019-20ನೇ ಸಾಲಿನಲ್ಲಿ ದಿನಾಂಕ 01-04-2019 ರಿಂದ 30-09-2019 ರವರೆಗೆ ಒಟ್ಟು ರೂ.33.62 ಲಕ್ಷ ಲಾಭಗಳಿಸಿರುತ್ತದೆ. ದಿನವೊಂದಕ್ಕೆ ಸದ್ರಿ ಮಳಿಗೆಯಲ್ಲಿ ಸರಾಸರಿ ರೂ.1.70 ಲಕ್ಷ ವ್ಯವಹಾರ ನಡೆಯುತ್ತದೆ.<br><br>ರಾಜ್ಯದಲ್ಲಿ ನಬಾರ್ಡ್ ಸಹಯೋಗದೊಂದಿಗೆ ಆರ್.ಐ.ಡಿ.ಎಫ್. ಯೋಜನೆಯಡಿ ಒಟ್ಟು ರೂ.15.00 ಕೋಟಿ ವೆಚ್ಚದಲ್ಲಿ 12 ಮತ್ಸ್ಯದರ್ಶಿನಿ ಮಳಿಗೆಗಳನ್ನು ನಿರ್ಮಿಸಲು ಉದ್ದೇಶಿಸಲಾಗಿದ್ದು, ಈ ಬಗ್ಗೆ ಪರಿಶೀಲಿಸಲಾಗುತ್ತಿದ್ದು, ಮಂಜೂರಾತಿ ದೊರೆತನಂತರ ಮಂಗಳೂರು, ಕುಂದಾಪುರ, ಉಡುಪಿ, ಮೈಸೂರು, ಕಲಬುರ್ಗಿ, ಬೆಳಗಾವಿ, ಹಾಸನ, ಹುಬ್ಬಳ್ಳಿ-ಧಾರವಾಡ, ವಿಜಯಪುರ, ತುಮಕೂರು, ಶಿವಮೊಗ್ಗ ಮತ್ತು ರಾಯಚೂರುಗಳಲ್ಲಿ ನಿಗಮದಿಂದ ಮತ್ಸ್ಯದರ್ಶಿನಿ ಮಳಿಗೆಗಳನ್ನುನಿರ್ಮಿಸಲಾಗುವುದು. |
| ಇ) | ಹಸಿ ಮೀನು ಮಾರಾಟ ಮಳಿಗೆಗಳು ಲಾಭದಲ್ಲಿವೆಯೇ; ವಾರ್ಷಿಕವಾಗಿ ಎಷ್ಟು ಲಾಭಗಳಿಸುತ್ತದೆ; (ವಿವರ ನೀಡುವುದು) | ನಿಗಮವು ತುಮಕೂರು, ಹಾಸನ, ಮಂಗಳೂರಿನ ಚಿಲಿಂಬಿ, ಮಡಿಕೇರಿ, ಶಿವಮೊಗ್ಗ, ಮೈಸೂರು ಮತ್ತು ಕೋಲಾರದಲ್ಲಿ ಹಸಿ ಮೀನು ಮಾರಾಟ ಮಳಿಗೆಯನ್ನು ನಡೆಸುತ್ತಾ ಬಂದಿರುತ್ತದೆ. ಸದ್ರಿ ಮಳಿಗೆಗಳ ಲಾಭ-ನಷ್ಟ ಗಳ ವಿವರಗಳು ಈ ಕೆಳಗಿನಂತಿದೆ. |

| ಮೀನು ಮಾರಾಟ ಮಳಿಗೆ | 2018-19ನೇ ಸಾಲಿನ ದಿನಾಂಕ: 31.3.2019ರ ಅಂತ್ಯಕ್ಕೆ ನಿವ್ವಳ ಲಾಭ/ನಷ್ಟ (+/-) (ರೂ. ಲಕ್ಷಗಳಲ್ಲಿ) |
|---|---|
| ತುಮಕೂರು | (+) 5.17 |
| ಹಾಸನ | (+) 1.47 |
| ಚಿಲಿಂಬಿ, ಮಂಗಳೂರು | (-) 1.05 |
| ಮಡಿಕೇರಿ | (-) 7.33 |
| ಶಿವಮೊಗ್ಗ (3 ಮಳಿಗೆಗಳು) | (-) 4.96 |
| ಮೈಸೂರು | (-) 5.72 |
| ಕೋಲಾರ | (-) 1.04 |

| | | |
|---|---|---|
| | | ನಿಗಮದ ಚಿಲಿಂಬಿ ಮಂಗಳೂರು, ಮಡಿಕೇರಿ, ಶಿವಮೊಗ್ಗ, ಮತ್ತು ಮೈಸೂರು ಮಳಿಗೆಗಳು ಖಾಸಗಿಯವರ ಪೈಪೋಟಿ ಯಿಂದಾಗಿ ನಷ್ಟವುಂಟಾಗಿದ್ದು, ಪ್ರಸ್ತುತ ಸಾಲಿನಲ್ಲಿ ಸದ್ರಿ ಮಳಿಗೆಗಳನ್ನು ಲಾಭದಲ್ಲಿ ನಡೆಸಲು ಕ್ರಮವಹಿಸಲಾಗಿದೆ.<br>ಇದಲ್ಲದೆ, ನಿಗಮವು ಬೆಂಗಳೂರಿನ ಯಲಹಂಕ, ಸಿದ್ಧಲಿಂಗಪ್ಪುರ ಮೈಸೂರು, ಸುಳ್ಯ ಮತ್ತು ಪುತ್ತೂರು ಇಲ್ಲಿ ಮಳಿಗೆಗಳನ್ನು ಹೊಂದಿದ್ದು, ಸದ್ರಿ ಮಳಿಗೆಗಳನ್ನು ಖಾಸಗಿಯವರಿಗೆ ಲೈಸೆನ್ಸ್ ಮೇಲೆ ನಡೆಸಲು ನೀಡಲಾಗಿದೆ. |
| ಈ) | ಕೆ.ಎಫ್.ಡಿ.ಸಿ. ಯಲ್ಲಿ ಪ್ರಸ್ತುತ ಎಷ್ಟು ನೌಕರರು ಕೆಲಸ ನಿರ್ವಹಿಸುತ್ತಿದ್ದಾರೆ; ಖಾಯಂ, ದಿನಗೂಲಿ ಮತ್ತು ಗುತ್ತಿಗೆ ಆಧಾರದ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವವರ ಸಂಖ್ಯೆ ಎಷ್ಟು? (ವಿವರ ನೀಡುವುದು) | ನಿಗಮದಲ್ಲಿ ಒಟ್ಟು 262 ಮಂಜೂರಾದ ಹುದ್ದೆಗಳಿದ್ದು, ಇದರಲ್ಲಿ 87 ಮಂದಿ ಖಾಯಂ ನೌಕರರು ಕಾರ್ಯ ನಿರ್ವಹಿಸುತ್ತಿದ್ದಾರೆ. ಅಲ್ಲದೆ, ಗುತ್ತಿಗೆ ಆಧಾರದಲ್ಲಿ ಒಟ್ಟು 145 ಮಂದಿ ನೌಕರರು ಕರ್ತವ್ಯ ನಿರ್ವಹಿಸುತ್ತಿದ್ದಾರೆ. ವಿವರಗಳು ಈ ಕೆಳಗಿನಂತಿದೆ:- |

**ಖಾಯಂ ನೌಕರರು**

| ಕ್ರ. ಸಂ. | ವರ್ಗ | ಮಂಜೂರಾದ ಹುದ್ದೆಗಳು | ಭರ್ತಿಯಾದ ಹುದ್ದೆಗಳು | ಖಾಲಿ ಇರುವ ಹುದ್ದೆಗಳು |
|---|---|---|---|---|
| 1) | ಎ | 7 | 2 | 5 |
| 2) | ಬಿ | 16 | 7 | 9 |
| 3) | ಸಿ | 198 | 58 | 140 |
| 4) | ಡಿ | 41 | 20 | 21 |
| | ಒಟ್ಟು | 262 | 87 | 175 |

**ಹೊರಗುತ್ತಿಗೆ ನೌಕರರು**

| ಕ್ರ. ಸಂ. | ವರ್ಗ | ಕರ್ತವ್ಯ ನಿರ್ವಹಿಸುತ್ತಿರುವ ನೌಕರರು |
|---|---|---|
| 1) | ಎ | 1 |
| 2) | ಬಿ | - |
| 3) | ಸಿ | 85 |
| 4) | ಡಿ | 59 |
| | ಒಟ್ಟು | 145 |

ಸಂಖ್ಯೆ: ಪಸಂಮೀ ಇ-78 ಮೀಇಯೋ 2020

(ಕೋಟ ಶ್ರೀನಿವಾಸ ಪೂಜಾರಿ)
ಮುಜರಾಯಿ, ಮೀನುಗಾರಿಕೆ ಹಾಗೂ
ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು